## ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 1607 |
| ಉತ್ತರಿಸಬೇಕಾದ ದಿನಾಂಕ | : 20.03.2020 |
| ಸದಸ್ಯರ ಹೆಸರು | : ಶ್ರೀ ಆಯನೂರು ಮಂಜುನಾಥ (ಪದವೀದರರ ಕ್ಷೇತ್ರ) |
| ಉತ್ತರಿಸುವ ಸಚಿವರು | : ಮಾನ್ಯ ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು |

<table>
<tr><th>ಕ್ರ.ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಅಂತಾರಾಷ್ಟ್ರೀಯ ಕ್ರೀಡೆಗಳಲ್ಲಿ ಚಿನ್ನವನ್ನು ಗೆದ್ದು ಭಾರತ ದೇಶಕ್ಕೆ ಗೌರವವನ್ನು ತಂದಿರುವ ಕ್ರೀಡಾಪಟುಗಳಿಗೆ ರಾಜ್ಯ ಸರ್ಕಾರದಿಂದ ಲಭಿಸುವ ಸೌಲಭ್ಯಗಳೇನು; ರಾಜ್ಯ ಸರ್ಕಾರದಿಂದ ಇವರಿಗೆ ಎಷ್ಟು ನಗದು ಬಹುಮಾನ ನೀಡಲಾಗುತ್ತಿದೆ.</td><td>ಕರ್ನಾಟಕ ಸರ್ಕಾರವು ಈ ಕೆಳಕಾಣಿಸಿದಂತೆ ಅಂತಾರಾಷ್ಟ್ರೀಯ ಕ್ರೀಡೆಗಳಲ್ಲಿ ಸಾಧನೆ ಮಾಡಿದ ಕ್ರೀಡಾಪಟುಗಳಿಗೆ ನೆಗದು ಪುರಸ್ಕಾರವನ್ನು ನೀಡುತ್ತಿದೆ.<br>ಲಕ್ಷಗಳಲ್ಲಿ
<table>
<tr><th>ಕ್ರ ಸಂ</th><th>ವಿವರ</th><th>ಚಿನ್ನ</th><th>ಬೆಳ್ಳಿ</th><th>ಕಂಚು</th></tr>
<tr><td>1</td><td>ಒಲಂಪಿಕ್ ಗೇಮ್ಸ್</td><td>500.00</td><td>300.00</td><td>200.00</td></tr>
<tr><td>2</td><td>ಏಷಿಯನ್ ಗೆಮ್ಸ್</td><td>25.00</td><td>15.00</td><td>8.00</td></tr>
<tr><td>3</td><td>ಕಾಮನ್‌ವೆಲ್ತ್ ಗೇಮ್ಸ್</td><td>25.00</td><td>15.00</td><td>8.00</td></tr>
<tr><td>4</td><td>ವರ್ಲ್ಡ್ ಕಪ್/ ಚಾಂಪಿಯನ್‌ಷಿಪ್ (ಭಾರತ ಸರ್ಕಾರದಿಂದ ಅಂಗೀಕೃತವಾಗಿ ಭಾರತ ತಂಡದ ಭಾಗವಾಗಿ ಪ್ರತಿನಿಧಿಸಿರಬೇಕು.)</td><td>5.00</td><td>3.00</td><td>2.00</td></tr>
<tr><td colspan="5">ಉಳಿದಂತೆ ಭಾರತ ಸರ್ಕಾರದಿಂದ ಅಂಗೀಕೃತವಾಗಿರುವ ಇನ್ನಿತರೆ ಅಂತಾರಾಷ್ಟ್ರೀಯ ಕ್ರೀಡಾಕೂಟಗಳಲ್ಲಿ ಭಾರತ ತಂಡವನ್ನು ಪ್ರತಿನಿಧಿಸಿ ಭಾಗವಹಿಸಿದಲ್ಲಿ/ಪದಕ ವಿಜೇತರಾದಲ್ಲಿ ರೂ.50,000/-ಗಳ ನಗದು ಪುರಸ್ಕಾರ ನೀಡುವುದು.</td></tr>
</table></td></tr>
<tr><td>ಆ)</td><td>ಈ ಕ್ರೀಡಾಪಟುಗಳಿಗೆ ವಿದ್ಯಾರ್ಹತೆಗೆ ತಕ್ಕ ಉದ್ಯೋಗ ಕಲ್ಪಿಸಿಕೊಡುವ ಯೋಜನೆ ಇದೆಯೇ; ಇಲ್ಲದಿದ್ದಲ್ಲಿ, ಇಂತಹ ಕ್ರೀಡಾಪಟುಗಳಿಗೆ ತಕ್ಷಣ ಉದ್ಯೋಗ ಕಲ್ಪಿಸುವ ಬಗ್ಗೆ ಸರ್ಕಾರ ಕ್ರಮ ಕೈಗೊಳ್ಳುವುದೆ;</td><td>ಕ್ರೀಡಾಕೋಟಾದಡಿ ಸರ್ಕಾರಿ ಉದ್ಯೋಗ ನೀಡುವ ವಿಷಯಕ್ಕೆ ಸಂಬಂಧಿಸಿದಂತೆ ವಿಶೇಷ ನೇಮಕಾತಿ ನಿಯಮಗಳನ್ನು ರಚಿಸುವ ಕಾರ್ಯವು ಸರ್ಕಾರದ ಪರಿಶೀಲನೆಯಲ್ಲಿದೆ.</td></tr>
<tr><td>ಇ)</td><td>ಇವರಿಂದ ಕೋರಿಕೆ ಬಂದಲ್ಲಿ ವಸತಿಹೀನರಿಗೆ ಬೆಂಗಳೂರಿನಲ್ಲಿ ಬಿಡಿಎ ನಿವೇಶನ ಮಂಜೂರು ಮಾಡಲಾಗುವುದೇ;<br><br>ಇಂತಹ ಕ್ರೀಡಾಪಟುಗಳಿಗೆ ವಿವಿಧ ಕ್ರೀಡಾ ಆಕಾಡೆಮಿಗೆ ತರಬೇತುದಾರರನ್ನಾಗಿ ನೇಮಿಸುವ ಉದ್ದೇಶ ಸರ್ಕಾರಕ್ಕೆ ಇದೆಯೇ;</td><td>ಕ್ರೀಡಾಪಟುಗಳಿಗೆ BDA ಮುಖಾಂತರ ನಿವೇಶನ ದೊರಕಿಸಿಕೊಡುವ ಯಾವುದೇ ಕಾರ್ಯಕ್ರಮ ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯಲ್ಲಿ ಇರುವುದಿಲ್ಲ.<br><br>ಕ್ರೀಡಾಪಟುಗಳಿಗೆ ವಿವಿಧ ಕ್ರೀಡಾ ಆಕಾಡೆಮಿಗೆ ತರಬೇತುದಾರರನ್ನಾಗಿ ನೇಮಿಸುವ ಉದ್ದೇಶ ಪ್ರಸ್ತುತ ಇರುವುದಿಲ್ಲ.</td></tr>
</table>

| | | |
|---|---|---|
| ಈ) | ರಾಜ್ಯದ ಕ್ರೀಡಾಪಟುಗಳು ಅಂತಾರಾಜ್ಯ ಮತ್ತು ಅಂತಾರಾಷ್ಟ್ರೀಯ ಕ್ರೀಡೆಗಳಲ್ಲಿ ಭಾಗವಹಿಸಲು ಅನುವಾಗುವಂತೆ ಅವರ ಎಲ್ಲ ಖರ್ಚು ವೆಚ್ಚಗಳನ್ನು ಸರ್ಕಾರ ಭರಿಸಲು ಮುಂದಾಗುವುದೇ; ಈಗಾಗಲೇ ಯಾವ ರೀತಿಯ ಸೌಲಭ್ಯಗಳನ್ನು ಒದಗಿಸಲಾಗುತ್ತಿದೆ; | ಕ್ರೀಡಾಪಟುಗಳು ಅಧಿಕೃತವಾಗಿ ಮಾನ್ಯತೆ ಪಡೆದ ಕ್ರೀಡಾ ಸಂಸ್ಥೆಗಳು ಆಯೋಜಿಸುವ ಅಂತರ್ ರಾಜ್ಯ ಕ್ರೀಡಾಕೂಟಗಳಲ್ಲಿ ಭಾಗವಹಿಸುವವರಿಗೆ ಎಲ್ಲಾ ವೆಚ್ಚಗಳನ್ನು ಭರಿಸಲು ಕರ್ನಾಟಕ ಕ್ರೀಡಾ ಪ್ರಾಧಿಕಾರವು ಆಯಾ ಕ್ರೀಡಾ ಸಂಸ್ಥೆಗಳಿಗೆ ಅನುದಾನ ನೀಡುತ್ತಿದೆ. ಅಧಿಕೃತ ಅಂತಾರಾಷ್ಟ್ರೀಯ ಮಟ್ಟದ ಕ್ರೀಡಾಕೂಟಗಳಲ್ಲಿ ಭಾಗವಹಿಸುವವರಿಗೆ ಎಲ್ಲಾ ವೆಚ್ಚಗಳನ್ನು ಭಾರತ ಸರ್ಕಾರವು ಭರಿಸುತ್ತಿದೆ. |
| ಉ) | ಗಾಲ್ಫ್ ಕ್ಲಬ್, ಬ್ಯಾಡ್ಮಿಂಟನ್ ಕ್ಲಬ್ ಇನ್ನಿತರ ಕ್ಲಬ್ ರೀತ್ಯಾ ರಾಜ್ಯದಲ್ಲಿ ಚೆಸ್ ಕ್ಲಬ್ ಆರಂಭಿಸುವ ಯೋಚನೆ ಸರ್ಕಾರದ ಮುಂದಿದೆಯೇ; | ಇಲ್ಲ. |
| ಊ) | ಅಂಗವಿಕಲರ ಚೆಸ್ ಕ್ರೀಡೆಯಲ್ಲಿ ಏಷಿಯನ್ ಪ್ಯಾರಾಗೇಮ್ಸ್ ಚಿನ್ನದ ಪದಕ ಪಡೆದ ಶಿವಮೊಗ್ಗದ ಕ್ರೀಡಾಪಟುಗೆ ಸರ್ಕಾರ ಇದುವರೆಗೆ ನೀಡಿರುವ ಸೌಲಭ್ಯಗಳೇನು; ಇವರ ಬೇಡಿಕೆಗಳೇನು? (ವಿವರ ನೀಡುವುದು) | ಶಿವಮೊಗ್ಗ ಜಿಲ್ಲೆಯ ಶ್ರೀ ಕಿಶನ್ ಗಂಗೊಳ್ಳಿ ಪ್ಯಾರಾ ಚೆಸ್ ಕ್ರೀಡಾಪಟು ಇವರು 2018ನೇ ಸಾಲಿನಲ್ಲಿ ಇಂಡೋನೇಷಿಯಾದ ಜಕಾರ್ತದಲ್ಲಿ ನಡೆದ ಪ್ಯಾರಾ ಏಷಿಯನ್ ಗೇಮ್ಸ್ ನ Rapid Chess ನಲ್ಲಿ ಚಿನ್ನದ ಪದಕ ಪಡೆದಿದ್ದು, ಈ ಬಗ್ಗೆ ನಗದು ಪುರಸ್ಕಾರ ನೀಡುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. 2018ನೇ ಸಾಲಿನಲ್ಲಿ ಇಂಡೋನೇಷಿಯಾದ ಜಕಾರ್ತದಲ್ಲಿ ನಡೆದ ಪ್ಯಾರಾ ಏಷಿಯನ್ ಗೇಮ್ಸ್ ನಲ್ಲಿ ಪದಕ ವಿಜೇತರಾದ ರಾಜ್ಯದ ಕ್ರೀಡಾಪಟುಗಳಿಗೆ ಸರ್ಕಾರಿ ಮಾರ್ಗಸೂಚಿಗಳನ್ವಯ ನಗದು ಪುರಸ್ಕಾರ ನೀಡಲು ಕ್ರಮವಹಿಸಲಾಗುತ್ತಿದೆ.<br><br>ಉಳಿದಂತೆ 2018ನೇ ಸಾಲಿನ ನಗದು ಪುರಸ್ಕಾರಕ್ಕಾಗಿ ದಿನಾಂಕ:18-02-2020 ರಂದು ರಾಜ್ಯದ ಅರ್ಹ ಕ್ರೀಡಾಪಟುಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿರುತ್ತದೆ. ಸದರಿಯವರ ನಗದು ಪುರಸ್ಕಾರದ ಪ್ರಸ್ತಾವನೆಯನ್ನು ನಗದು ಪುರಸ್ಕಾರದ ಅರ್ಜಿ ಎಂದು ಪರಿಗಣಿಸಿ ನಿಯಮಾನುಸಾರ ಪರಿಶೀಲಿಸಿ ನಗದು ಪುರಸ್ಕಾರ ನೀಡಲು ಕ್ರಮವಹಿಸಲಾಗುವುದು. |

**ವೈಎಸ್ ಡಿ-/ಇಬಿಬಿ/62/2020**

**(ಸಿ. ಟಿ. ರವಿ)**

ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ
ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.